

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1006 |
| ಸದಸ್ಯರ ಹೆಸರು | ಶ್ರೀ ಹೆಚ್.ಎಂ.ರಮೇಶ ಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 21.09.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ, ಹಿರಿಯ ನಾಗರಿಕರ ಸಬಲೀಕರಣ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಗಣಿ ಇಲಾಖೆಯಿಂದ ಪರವಾನಗಿ ಪಡೆಯದೆ- ಗಣಿಗಾರಿಕೆ ನಡೆಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುತ್ತದೆ. |
| ಆ) | ಅಕ್ರಮವಾಗಿ ಗಣಿಗಾರಿಕೆ ನಡೆಸುತ್ತಿರುವವರ ವಿರುದ್ಧ ಯಾವ ರೀತಿ ಕ್ರಮ ಕೈಗೊಳ್ಳಲಾಗಿದೆ; (ವಿವರ ನೀಡುವುದು) | ಅಕ್ರಮ ಗಣಿ / ಕಲ್ಲು ಗಣಿಗಾರಿಕೆ ನಡೆಸುವವರ ವಿರುದ್ಧ ಎಂ.ಎಂ. (ಡಿ&ಆರ್) ಕಾಯ್ದೆ, 1957 ಹಾಗೂ ಕೆ.ಎಂ.ಎಂ.ಸಿ.ಆರ್ 1994 ರಂತೆ ಮೊಕದ್ದಮೆಗಳನ್ನು ದಾಖಲಿಸಲು ಹಾಗೂ ದಂಡ ವಿಧಿಸಿ ಸಂಗ್ರಹಿಸಲು ಕ್ರಮ ವಹಿಸಲಾಗುತ್ತಿದೆ. |
| ಇ) | ಅಕ್ರಮ ಗಣಿಗಾರಿಕೆಯಿಂದ ಸರ್ಕಾರದ ಬೊಕ್ಕಸಕ್ಕೆ ಆಗಿರುವ ನಷ್ಟ ಎಷ್ಟು; (ಜಿಲ್ಲಾವಾರು ವಿವರ ನೀಡುವುದು) | ಅಕ್ರಮ ಗಣಿ / ಕಲ್ಲು ಗಣಿಗಾರಿಕೆ ನಡೆಸುವವರ ವಿರುದ್ಧ ಎಂ.ಎಂ. (ಡಿ&ಆರ್) ಕಾಯ್ದೆ, 1957 ಹಾಗೂ ಕೆ.ಎಂ.ಎಂ. ಸಿ. ನಿಯಮಗಳು, 1994ರ ನಿಯಮಗಳಂತೆ ಮೊಕದ್ದಮೆ ಗಳನ್ನು ದಾಖಲಿಸಲು ಹಾಗೂ ದಂಡ ವಿಧಿಸಿ ಸಂಗ್ರಹಿಸಲು ಕ್ರಮ ವಹಿಸಲಾಗುತ್ತಿದೆ.<br>ಈ ಬಗ್ಗೆ ಕಳೆದ 03 ವರ್ಷಗಳಲ್ಲಿ ಕೈಗೊಂಡ ಕ್ರಮಗಳ ವಿವರ ಕೆಳಕಂಡಂತಿದೆ: |

**ಮುಖ್ಯ ಖನಿಜ ಅಕ್ರಮ ಗಣಿಗಾರಿಕೆ:-**

| ಕ್ರ. ಸಂ | ವರ್ಷ | ಪತ್ತೆಹಚ್ಚಿದ ಪ್ರಕರಣಗಳ ಸಂಖ್ಯೆ | ವಿಧಿಸಿದ ದಂಡ (ರೂ. ಲಕ್ಷಗಳಲ್ಲಿ) | ದಾಖಲಿಸಿರುವ ಮೊಕದ್ದಮೆ ಗಳು |
|---|---|---|---|---|
| 1. | 2018-19 | 05 | 2.00 | 01 |
| 2. | 2019-20 | 03 | - | 03 |
| 3. | 2020-21 | 01 | - | 01 |
| **ಒಟ್ಟು** | | **09** | **2.00** | **05** |

**ಅಕ್ರಮ ಕಲ್ಲುಗಣಿಗಾರಿಕೆ:-**

| ಕ್ರ. ಸಂ | ವರ್ಷ | ಪತ್ತೆಹಚ್ಚಿದ ಪ್ರಕರಣಗಳ ಸಂಖ್ಯೆ | ವಿಧಿಸಿದ ದಂಡ (ರೂ.ಲಕ್ಷ ಗಳಲ್ಲಿ) | ದಾಖಲಿಸಿರುವ ಮೊಕದ್ದಮೆ ಗಳು |
|---|---|---|---|---|
| 1. | 2018-19 | 413 | 1213.37 | 108 |

| | | | | |
|---|---|---|---|---|
| 2. | 2019-20 | 266 | 908.70 | 117 |
| 3. | 2020-21 | 555 | 1576.62 | 149 |
| **ಒಟ್ಟು** | | **1234** | **3698.69** | **374** |

| | | |
|---|---|---|
| **ಈ)** | ಸರ್ಕಾರದಿಂದ ಅಕ್ರಮ ಗಣಿಗಾರಿಕೆ ತಡೆಯಲು ಕೈಗೊಂಡ ಕ್ರಮಗಳೇನು? | 1. ಗಣಿ ಮತ್ತು ಭೂವಿಜ್ಞಾನ ಇಲಾಖೆಯಲ್ಲಿ ಖನಿಜಗಳ ಗಣಿಗಾರಿಕೆಗಾಗಿ ಗಣಿ ಗುತ್ತಿಗೆಗಳನ್ನು ಪಾರದರ್ಶಕವಾಗಿ ಹರಾಜು ಮೂಲಕ ಮಂಜೂರು ಮಾಡಲಾಗುತ್ತಿದೆ.<br>2. ರಾಜ್ಯದಲ್ಲಿ ಮಂಜೂರು ಮಾಡಿರುವ ಕಲ್ಲು ಗಣಿಗುತ್ತಿಗೆ ಪ್ರದೇಶಗಳಲ್ಲಿ ಹಾಗೂ ಕಲ್ಲು ಗಣಿಗುತ್ತಿಗೆ ಪ್ರದೇಶವನ್ನು ಒತ್ತುವರಿ ಮಾಡಿ ನಿಯಮ ಉಲ್ಲಂಘಿಸಿ ಸಂಚಿತ ಆಡಿಟ್ ಪ್ರಮಾಣಕ್ಕಿಂತ ಅಧಿಕವಾಗಿ ಉಪಖನಿಜವನ್ನು ಉತ್ಪಾದಿಸಿ, ಸಾಗಾಣಿಕೆ ಮಾಡಿರುವುದನ್ನು ಕರ್ನಾಟಕ ರಾಜ್ಯ ದೂರ ಸಂವೇದಿ ಕೇಂದ್ರ (KSRSAC) ರವರಿಂದ ಕಲ್ಲುಗಣಿ ಗುತ್ತಿಗೆ ಪ್ರದೇಶಗಳ ಡ್ರೋಣ್ / ಡಿ.ಜಿ.ಪಿ.ಎಸ್ ಸರ್ವೆ ಕೈಗೊಂಡು ಮೂಲ ಖನಿಜ ಉತ್ಪಾದನಾ ಸ್ಥಳದಲ್ಲಿ ರಾಜಧನ ಸೋರಿಕೆ ತಡೆಗಟ್ಟಲು ಕ್ರಮವಹಿಲಾಗುತ್ತಿದೆ.<br>3. Integrated Lease Management System (ILMS) version-II ಜಾರಿಗೊಳಿಸಲಾಗುತ್ತಿದ್ದು, ಅನಧಿಕೃತ ಖನಿಜ ಸಾಗಾಣಿಕೆಯನ್ನು ತಡೆಗಟ್ಟಲು ಖನಿಜ ಸಾಗಾಣಿಕಾ ವಾಹನಗಳಿಗೆ GPS ಅಳವಡಿಸಿ ಕೇಂದ್ರೀಕೃತವಾಗಿ ನಿಗಾವಹಿಸಲು ತಂತ್ರಾಂಶ ರೂಪಿಸಲಾಗುತ್ತಿದೆ.<br>4. ಅನಧಿಕೃತ ಖನಿಜ ಸಾಗಾಣಿಕೆಯನ್ನು ಪತ್ತೆ ಹಚ್ಚಲು ಖನಿಜ ರವಾನೆ ಪರವಾನಿಗೆ ಕಡ್ಡಾಯಗೊಳಿಸಲಾಗಿದ್ದು, ಖನಿಜ ರವಾನೆ ಪರವಾನಿಗೆ ವಿಶೇಷ ರಕ್ಷಣಾತ್ಮಕ ಹಾಳೆಯಲ್ಲಿ ವಿತರಿಸಲಾಗುತ್ತಿದೆ.<br>5. ಮಂಜೂರಾದ ಗಣಿ/ಕಲ್ಲುಗಣಿ ಗುತ್ತಿಗೆ ಪ್ರದೇಶಗಳನ್ನು ಹೊರತುಪಡಿಸಿ ಗುತ್ತಿಗೆ ಪ್ರದೇಶದ ಹೊರಭಾಗದಲ್ಲಿ ಒತ್ತುವರಿ ಮಾಡಿ ಗಣಿಗಾರಿಕೆಯನ್ನು ನಡೆಸುವುದನ್ನು ತಡೆಗಟ್ಟಲು Geo-fencing ಅಳವಡಿಸಿ ನಿರ್ವಹಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br>6. ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಐ 21 ಎಂಎಂಎನ್ (2) 2014, ದಿನಾಂಕ 21.01.2014 ರಂತೆ ಗಣಿ ಮತ್ತು ಖನಿಜ (ಅಭಿವೃದ್ಧಿ ಮತ್ತು ನಿಯಂತ್ರಣ) ಕಾಯ್ದೆ, 1957ರ ಕಲಂ 21 ಮತ್ತು 22 ರಡಿ ಹಾಗೂ ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994ರ ನಿಯಮ 43 ಮತ್ತು 46 ರಂತೆ ಅನಧಿಕೃತ ಗಣಿಗಾರಿಕೆ, ಸಾಗಾಣಿಕೆ ಮತ್ತು ದಾಸ್ತಾನು ವಿರುದ್ಧ ಕ್ರಮವಹಿಸಲು, ಕಂದಾಯ, ಅರಣ್ಯ ಪೊಲೀಸ್ ಹಾಗೂ ಗಣಿ ಮತ್ತು ಭೂವಿಜ್ಞಾನ ಇಲಾಖೆ ಅಧಿಕಾರಿಗಳಿಗೆ ಅಧಿಕಾರವನ್ನು ಪ್ರತ್ಯಾಯೋಜಿಸಲಾಗಿದೆ.<br>7. ಅನಧಿಕೃತ ಗಣಿಗಾರಿಕೆಯನ್ನು ತಡೆಗಟ್ಟಲು ಖನಿಜ ರಕ್ಷಣಾ ಪಡೆ ಸ್ಥಾಪಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |

--3

| | | |
|---|---|---|
| | | 8. ಅನಧಿಕೃತ ಕಲ್ಲು ಗಣಿಗಾರಿಕೆ / ಸಾಗಾಣಿಕೆಯನ್ನು ನಿಯಂತ್ರಿಸಲು ಜಿಲ್ಲಾ ಟಾಸ್ಕ್ ಫೋರ್ಸ್ (ಗಣಿ) ಸಮಿತಿಯಿಂದ ರಾಜ್ಯದಲ್ಲಿ ಆಯಾಕಟ್ಟಿನ ಪ್ರದೇಶಗಳಲ್ಲಿ ತನಿಖಾ ಠಾಣೆಗಳನ್ನು ತೆರೆದು ಕಾರ್ಯ ನಿರ್ವಹಿಸಲಾಗುತ್ತಿದೆ.<br>9. ಅಲ್ಲದೆ ಆಯಾ ಜಿಲ್ಲಾ ವ್ಯಾಪ್ತಿಗಳಲ್ಲಿ ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ ಚಾಲಿತ ದಳವನ್ನು ರಚಿಸಿಕೊಂಡು ಅನಧಿಕೃತ ಕಲ್ಲು ಗಣಿಗಾರಿಕೆ / ಸಾಗಾಣಿಕೆಯನ್ನು ನಿಯಂತ್ರಿಸಲಾಗುತ್ತಿದೆ. |

ಸಂಖ್ಯೆ ಸಿಐ 480 ಎಂಎಂಎನ್ 2021

Halappa BA

ಆಚಾರ್ ಹಾಲಪ್ಪ ಬಸಪ್ಪ
ಗಣಿ ಮತ್ತು ಭೂವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ಹಿರಿಯ ನಾಗರಿಕರ ಸಬಲೀಕರಣ

(ಆಚಾರ್ ಹಾಲಪ್ಪ ಬಸಪ್ಪ)
ಗಣಿ ಮತ್ತು ಭೂವಿಜ್ಞಾನ ಹಾಗೂ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು
ವಿಕಲಚೇತನರ, ಹಿರಿಯ ನಾಗರಿಕರ
ಸಬಲೀಕರಣ ಸಚಿವರು.